# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 99
ಸದಸ್ಯರ ಹೆಸರು : ಎನ್.ಅಪ್ಪಾಜಿಗೌಡ
ಉತ್ತರಿಸುವ ದಿನಾಂಕ : 01.02.2021.
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 5 ವರ್ಷಗಳಲ್ಲಿ ಮಂಡ್ಯ ಜಿಲ್ಲೆಯಲ್ಲಿ ಸಮಾಜ ಕಲ್ಯಾಣ ಇಲಾಖೆಯಡಿಯಲ್ಲಿ ಬರುವ ವಿವಿಧ ನಿಗಮಗಳಿಂದ ಕೊರೆದ ಕೊಳವೆಬಾವಿಗಳ ಸಂಖ್ಯೆ ಎಷ್ಟು; ನಿಗಮವಾರು/ವರ್ಷವಾರು/ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು. | ಅನುಬಂಧದಲ್ಲಿ ನೀಡಿದೆ. |
| ಆ) | ಗಂಗಾ ಕಲ್ಯಾಣ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಅನುಸರಿಸುವ ಮಾನದಂಡಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಗಂಗಾ ಕಲ್ಯಾಣ ಯೋಜನೆಯನ್ನು ಅನುಷ್ಠಾನಗೊಳಿಸಲು ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗಿದೆ.<br>• ಅರ್ಜಿದಾರರು ಪರಿಶಿಷ್ಠ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು.<br>• ಅರ್ಜಿದಾರರು ಕನಿಷ್ಠ ಕಳೆದ 15 ವರ್ಷಗಳಿಂದ ಕರ್ನಾಟಕದಲ್ಲಿ ವಾಸಿಸುತ್ತಿರಬೇಕು.<br>• ಅರ್ಜಿದಾರರು 18 ರಿಂದ 60ವರ್ಷಗಳ ವಯೋಮಿತಿಯೊಳಗಿರಬೇಕು.<br>• ಕನಿಷ್ಠ 1 1/2 ಎಕರೆ ಯಿಂದ 5.00 ಎಕರೆ ಖುಷ್ಕಿ ಜಮೀನು ಹೊಂದಿರಬೇಕು. (ಉಡುಪಿ, ಮಂಗಳೂರು, ಕೊಡಗು, ಉತ್ತರ ಕನ್ನಡ, ಶಿವಮೊಗ್ಗ, ಚಿಕ್ಕಮಂಗಳೂರು ಮತ್ತು ಹಾಸನ ಜಿಲ್ಲೆಗಳಿಗೆ ಕನಿಷ್ಠ 1.00 ಎಕರೆ)<br>• ಕುಟುಂಬದ ವಾರ್ಷಿಕ ಆದಾಯ ಗ್ರಾಮೀಣ ಪ್ರದೇಶಗಳಲ್ಲಿ ರೂ. 1,50,000/- ಹಾಗೂ ನಗರ ಪ್ರದೇಶಗಳಲ್ಲಿ ರೂ. ರೂ 2,00,000/- ಗಳಿಗಿಂತ ಮೀರಿರಬಾರದು.<br>• ಅರ್ಜಿದಾರರು ಸಣ್ಣ/ಅತೀಸಣ್ಣ ಹಿಡುವಳಿದಾರರಾಗಿರಬೇಕು.<br>• ಅರ್ಜಿದಾರರ ಕುಟುಂಬದ ಯಾವುದೇ ಸದಸ್ಯರು ಸರ್ಕಾರಿ/ಅರೆ ಸರ್ಕಾರಿ ನೌಕರಿಯಲ್ಲಿರಬಾರದು.<br>• ಅರ್ಜಿದಾರರಾಗಲೀ, ಕುಟುಂಬದ ಸದಸ್ಯರಾಗಲೀ ನಿಗಮದ ಯಾವುದೇ ಯೋಜನೆಯಡಿ ಈ ಹಿಂದೆ ಸೌಲಭ್ಯವನ್ನು ಪಡೆದಿರಬಾರದು. |
| ಇ) | ಗಂಗಾ ಕಲ್ಯಾಣ ಯೋಜನೆಯಡಿ ಕೊಳವೆಬಾವಿ ಕೊರೆಯುವುದರಲ್ಲಿ ನಡೆದಿರುವ ಅವ್ಯವಹಾರದ ಬಗ್ಗೆ ರಚಿಸಲಾದ ತನಿಖಾ ತಂಡ ವರದಿಯನ್ನು ನೀಡಲಾಗಿದೆಯೇ; ನೀಡಿದ್ದಲ್ಲಿ ವರದಿಯ ಪ್ರತಿಯನ್ನು ಒದಗಿಸುವುದು; | ಡಾ: ಬಿ.ಆರ್ ಅಂಬೇಡ್ಕರ್ ಅಭಿವೃದ್ಧಿ ನಿಗಮ ಮತ್ತು ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮಗಳಿಂದ ಅನುಷ್ಠಾನಗೊಳಿಸಲಾಗುತ್ತಿರುವ ಗಂಗಾ ಕಲ್ಯಾಣ ಯೋಜನೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರದ ಬಗ್ಗೆ ತನಿಖೆ ನಡೆಸಲು ಸರ್ಕಾರದ ಆದೇಶ ಸಂಖ್ಯೆ:ಸಕಇ 562 ಎಸ್‌ಡಿಸಿ 2018 ದಿನಾಂಕ:30.11.2019ರಲ್ಲಿ ನಿವೃತ್ತ ಐ.ಎ.ಎಸ್. ಅಧಿಕಾರಿಯವರ ನೇತೃತ್ವದ ಅಧಿಕಾರಿಗಳ ತನಿಖಾ ತಂಡವನ್ನು ರಚಿಸಲಾಗಿದೆ. ಸದರಿ ತಂಡವು ಕೋವಿಡ್-19 ಹಿನ್ನಲೆಯಲ್ಲಿ ತನಿಖೆ ಪೂರ್ಣಗೊಂಡಿರುವುದಿಲ್ಲ ಎಂದು ವರದಿ ಮಾಡಿರುತ್ತಾರೆ. |
| ಈ) | ಅವ್ಯವಹಾರದಲ್ಲಿ ಭಾಗಿಯಾದ ತಪ್ಪಿತಸ್ಥರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ? (ಸಂಪೂರ್ಣ ಮಾಹಿತಿ ನೀಡುವುದು) | ಉದ್ಭವಿಸುವುದಿಲ್ಲ. |

ಸಂಖ್ಯೆ: ಸಕಇ 14 ಆರ್‌&ಐ 2021

(ಬಿ.ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

# ಅನುಬಂಧ

ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಗಂಗಾ ಕಲ್ಯಾಣ ಯೋಜನೆಯಡಿ ಕಳೆದ 5 ವರ್ಷಗಳಲ್ಲಿ ಮಂಡ್ಯ ಜಿಲ್ಲೆಯಲ್ಲಿ ಒಟ್ಟು 663 ಕೊಳವೆಬಾವಿಗಳನ್ನು ಕೊರೆಸಲಾಗಿದೆ. ವಿವರ ಈ ಕೆಳಗಿನಂತಿದೆ:

| ವಿಧಾನಸಭಾ ಕ್ಷೇತ್ರ | ಕೊರೆದ ಕೊಳವೆಬಾವಿಗಳ ಸಂಖ್ಯೆ | | | | |
|---|---|---|---|---|---|
| | 2015-16 | 2016-17 | 2017-18 | 2018-19 | 2019-20 |
| ಕೆ.ಆರ್.ಪೇಟೆ | 34 | 26 | 34 | 18 | 0 |
| ಮದ್ದೂರು | 16 | 16 | 13 | 10 | 0 |
| ಮಳವಳ್ಳಿ | 72 | 30 | 51 | 0 | 0 |
| ಮಂಡ್ಯ | 26 | 21 | 07 | 12 | 0 |
| ನಾಗಮಂಗಲ | 25 | 28 | 28 | 07 | 0 |
| ಮೇಲುಕೋಟೆ | 24 | 27 | 31 | 11 | 0 |
| ಶ್ರೀರಂಗಪಟ್ಟಣ | 29 | 31 | 36 | 0 | 0 |
| ಒಟ್ಟು | 226 | 179 | 200 | 58 | 0 |

ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮದಿಂದ ಗಂಗಾ ಕಲ್ಯಾಣ ಯೋಜನೆಯಡಿ ಕಳೆದ 5 ವರ್ಷಗಳಲ್ಲಿ ಮಂಡ್ಯ ಜಿಲ್ಲೆಯಲ್ಲಿ ಒಟ್ಟು 13 ಕೊಳವೆಬಾವಿಗಳನ್ನು ಕೊರೆಸಲಾಗಿದೆ. ವಿವರ ಈ ಕೆಳಗಿನಂತಿದೆ:

| ವಿಧಾನಸಭಾ ಕ್ಷೇತ್ರ | 2015-16 | 2016-17 | 2017-18 | 2018-19 | 2019-20 |
|---|---|---|---|---|---|
| ಮಂಡ್ಯ | 02 | 0 | 0 | 02 | 0 |
| ಮದ್ದೂರು | 0 | 0 | 0 | 0 | 0 |
| ಮಳವಳ್ಳಿ | 01 | 0 | 0 | 0 | 0 |
| ಕೆ.ಆರ್.ಪೇಟೆ | 01 | 0 | 02 | 0 | 0 |
| ಪಾಂಡವಪುರ | 0 | 0 | 01 | 02 | 0 |
| ಶ್ರೀರಂಗಪಟ್ಟಣ | 0 | 0 | 0 | 0 | 0 |
| ನಾಗಮಂಗಲ | 0 | 01 | 01 | 0 | 0 |
| ಒಟ್ಟು | 04 | 01 | 04 | 04 | 0 |